ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಸ್ಥಳೀಯ ಸಂಸ್ಥೆಗಳ ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಕ್ಕೆ ಚುನಾವಣೆ ಕುರಿತು

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ):-

026 (200) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಸ್ಥಳೀಯ ಸಂಸ್ಥೆಗಳಾದ ಪಟ್ಟಣ ಪಂಚಾಯ್ತಿ, ಪುರಸಭೆ, ನಗರಸಭೆಗಳ ಸದಸ್ಯತ್ವಕ್ಕೆ ಚುನಾವಣೆಗಳು ಮುಕ್ತಾಯಗೊಂಡು, ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಹುದ್ದೆಗಳಿಗೆ ಚುನಾವಣೆ ನಡೆಸದಿರುವ ಒಟ್ಟು ಸಂಸ್ಥೆಗಳ ಸಂಖ್ಯೆ ಎಷ್ಟು ; (ವಿಭಾಗವಾರು ವಿವರ ನೀಡುವುದು)

(ಆ) ಸದರಿ ಸಂಸ್ಥೆಗಳ ಸದಸ್ಯತ್ವಕ್ಕೆ ಯಾವ ದಿನಾಂಕಗಳಂದು ಚುನಾವಣೆಗಳನ್ನು ನಡೆಸಲಾಗಿದೆ ; (ವಿವರ ನೀಡುವುದು)

(ಇ) ಇದುವರೆವಿಗೂ ಸದರಿ ಸಂಸ್ಥೆಗಳ ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆ ಮಾಡದೆ ಇರಲು ಕಾರಣಗಳೇನು ; (ವಿವರ ನೀಡುವುದು)

(ಈ) ಚುನಾಯಿತ ಪ್ರತಿನಿಧಿಗಳ ಸಮಿತಿಗಳು ದೀರ್ಘಕಾಲದಿಂದ ಅಸ್ತಿತ್ವಕ್ಕೆ ಬಾರದೆ ಇರುವುದರಿಂದ ಜನ ಸಾಮಾನ್ಯರಿಗೆ ತೊಂದರೆ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಯಾವ ಕಾಲಮಿತಿಯಲ್ಲಿ ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆ ನಡೆಸಲಾಗುವುದು?